


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

॥ ವೇದೋಽಖಿಲೋ ಧರ್ಮಮೂಲಮ್ ॥

www.jyothishamithra.com

ಸಂಚಿಕೆ : 960 02-04-2021 ಶುಕ್ರವಾರ

ಶಾರ್ವರಿಸಂವತ್ಸರ ಉತ್ತರಾಯಣ ಶಿಶಿರಋತು ಫಾಲ್ಗುನಮಾಸ ಕೃಷ್ಣಪಕ್ಷ

## ನಿತ್ಯ ಪಂಚಾಂಗ

ತಿಥಿ : ಪಂಚಮಿ (ಗಂಟೆ 08.14ರ ವರೆಗೆ)

ನಕ್ಷತ್ರ : ಜ್ಯೇಷ್ಠಾ (ಗಂಟೆ 27.43ರ ವರೆಗೆ)

ರಾಹುಕಾಲ : (ಗಂಟೆ 11.02 AM - 12.34 PM ವರೆಗೆ)

ಗುಳಿಕಕಾಲ : (ಗಂಟೆ 07.58 AM - 09.30 AM ವರೆಗೆ)

## ಸುಜ್ಞಾನ

ಮಾಡುವ ಯಾವುದೇ ಕೆಲಸವನ್ನು ಇಷ್ಟಪಟ್ಟು ಮಾಡಿದರೆ ಕಷ್ಟವಾಗಲ್ಲ, ಮನಸಿಟ್ಟು ಮಾಡಿದರೆ ಬೇಸರವಾಗಲ್ಲ, ಭಯವಿಲ್ಲದೆ ಮಾಡಿದರೆ ತಪ್ಪಾಗಲ್ಲ. ಆದರೆ ಕೆಲಸದ ಬಗ್ಗೆ ತಿಳಿದಿರಬೇಕು.

# ಚಾಣಕ್ಯ ನೀತಿ



ಭೋಜ್ಯಂ ಭೋಜನಶಕ್ತಿಶ್ಚ ರತಿಶಕ್ತಿರ್ವರಾಂಗನಾ |
ವಿಭವೋ ದಾನಶಕ್ತಿಶ್ಚ ನಾಲ್ಪಸ್ಯ ತಪಸಃ ಫಲಮ್ ||

ಉತ್ತಮ ಊಟ ಮತ್ತು ಉಂಡಿದ್ದನ್ನು ಜೀರ್ಣಿಸಿಕೊಳ್ಳುವ ಶಕ್ತಿ, ಸುಂದರ ಹೆಂಡತಿ ಮತ್ತು ಅವಳೊಂದಿಗೆ ಸುಖಿಸುವ ಸಾಮರ್ಥ್ಯ, ಭೂರಿ ಸಂಪತ್ತು ಮತ್ತು ಅದನ್ನು ದಾನ ಮಾಡುವ ಬುದ್ಧಿ - ಇವು ಅಲ್ಪರಿಗೆ ದಕ್ಕುವುದಿಲ್ಲ. ತಪಸ್ಸಿಗಳಿಗೆ ಮಾತ್ರ ಸಿದ್ಧಿಸುತ್ತದೆ.

ತಪ್ಪಸ್ಸು ಅಂದರೆ ಕಾಡಿನಲ್ಲಿ ಪದ್ಮಾಸನ ಹಾಕಿ ಕುಳಿತು ದೇವರನ್ನು ಧ್ಯಾನಿಸುವುದು ಮಾತ್ರವಲ್ಲ, ಕಷ್ಟಪಟ್ಟು ಮಾಡುವ ಎಲ್ಲ ಒಳ್ಳೆಯ ಪ್ರಯತ್ನವೂ ತಪಸ್ಸೇ. ಒಳ್ಳೆಯ ಊಟ, ಒಳ್ಳೆಯ ಹೆಂಡತಿ, ಸಾಕಷ್ಟು ಸಂಪತ್ತು ಇವು ಉತ್ತಮ ಪ್ರಯತ್ನದಿಂದ ಮಾತ್ರ ಲಭಿಸುತ್ತವೆ. ಒಳ್ಳೆಯ ಊಟ ಸಿಗಲು ಕಷ್ಟಪಟ್ಟು ಕೆಲಸ ಮಾಡಬೇಕು. ಕಷ್ಟಪಟ್ಟರೆ ಜೀರ್ಣಶಕ್ತಿ ವೃದ್ಧಿಸುತ್ತದೆ. ವಾಮಮಾರ್ಗದಲ್ಲಿ ಸಂಪಾದಿಸಿದವರಿಗೆ ಅದನ್ನು ಉಂಡು ದಕ್ಕಿಸಿಕೊಳ್ಳುವ ಶಕ್ತಿ ಇರದಿರುವುದು ಇದೇ ಕಾರಣಕ್ಕೆ ಕಷ್ಟಪಟ್ಟು ಸಾಧನೆ ಮಾಡುವವರಿಗೆ ಒಳ್ಳೆಯ ಹೆಂಡತಿಯೂ ಲಭಿಸುತ್ತಾಳೆ. ದೇಹ ಸುಸ್ಥಿತಿಯಲ್ಲಿರುವ ಕಾರಣ ಅವಳೊಂದಿಗೆ ಸುಖಿಸುವ ಶಕ್ತಿಯೂ ಇರುತ್ತದೆ. ಇನ್ನು, ಸಾಧಕರ ಬಳಿಗೆ ಸಂಪತ್ತು ತನ್ನಿಂತಾನೇ ಹರಿದುಬರುತ್ತದೆ. ಅದನ್ನು ಕಷ್ಟದಲ್ಲಿರುವವರಿಗೆ ನೀಡುವ ಬುದ್ಧಿ ಮಾತ್ರ ಸಂಸ್ಕಾರದಿಂದ ಬರಬೇಕು.

# ಪ್ರೇತಭಾದೆ ಇರುವ ಜಾತಕ





**ಜನನ ದಿನಾಂಕ : 08-04-1984  ಸಮಯ : 10.07 PM  ಸ್ಥಳ : ಬೆಂಗಳೂರು**

| | | | |
|---|---|---|---|
| ರವಿ<br>ಶುಕ್ರ | ಬುಧ | ರಾಹು | ಚಂದ್ರ |
| | ಗ್ರಹ ಕುಂಡಲಿ | | |
| | | | |
| ಗುರು | ಲಗ್ನ ಕುಜ<br>ಕೇತು<br>ಮಾಂದಿ | ಶನಿ | |

ಇದು ವೃಶ್ಚಿಕ ಲಗ್ನ ಜಾತಕ . ಲಗ್ನದಲ್ಲಿ ಲಗ್ನಾಧಿಪತಿ-ಷಷ್ಠಾಧಿಪತಿಯಾದ ಕುಜ, ಮಾಂತ್ರಿಕ-ಅಗೋಚರ ಗ್ರಹ



ಕೇತು, ಪ್ರೇತಕಾರಕನಾದ ಮಾಂದಿ ಇರುವುದರಿಂದ ತನ್ನ ವಂಶದಲ್ಲಿಯೇ ಗತಿಸಿ ಮುಕ್ತಿ ಕಾಣದ ಪ್ರೇತವು ಇವರ ದೇಹವನ್ನು ಸೇರಿರುವುದು. ಇದರಿಂದ ಜಾತಕರು ಮುಂಗೋಪಿ, ಹಠಮಾರಿ, ವಿಚಿತ್ರ ವರ್ತನೆ, ವಿಪರೀತ ಮದ್ಯಪಾನ ಮಾಡುವರು, ಎಲ್ಲರಿಗೂ ವಿರೋಧವಾಗಿ ನಡೆದುಕೊಳ್ಳುವರು. ದೇವರಲ್ಲಿ ನಂಬಿಕೆ ಇಲ್ಲ, ವಾಮಮಾರ್ಗದ ಮೂಲಕ ಜೀವಿಸುವರು.

ಮಾತೃ ಸ್ಥಾನಾಧಿಪತಿಯಾದ ಶನಿಯು ಉಚ್ಚನಾಗಿ ವ್ಯಯಭಾವದಲ್ಲಿರುವನು. ಮಾತೃಸ್ಥಾನ ಮತ್ತು ಮಾತೃಕಾರಕನಾದ ಚಂದ್ರನನ್ನು ಕುಜ

ನೋಡುವುದರಿಂದ ತಾಯಿಯ ಜೊತೆ ಅಸಮಾಧಾನ, ಕಲಹ, ವಿರೋಧ, ತಾಯಿಯನ್ನು ನಿಂದಿಸುವರು. ತಾಯಿಯನ್ನೇ ಹಿಡಿದುಕೊಂಡು ಹೊಡೆಯುವರು. ಹಠ, ಉದ್ವೇಗ ಜಾಸ್ತಿ. ಆದರೆ ಅದೃಷ್ಟವಶಾತ್ ಮಾತೃಕಾರಕನಾದ ಚಂದ್ರನನ್ನು ಗುರು ನೋಡಿದರ ಪರಿಣಾಮ ತಾಯಿಯು ಉಳಿದುಕೊಂಡಳು.

ವಿವಾಹ ಸ್ಥಾನವಾದ ಸಪ್ತಮ ಭಾವದಲ್ಲಿ ರಾಹುವಿದ್ದು ಮಾಂದಿಯುತ ಕೇತು-ಕುಜ ನೋಡುವರು. ಇದರಿಂದ ವಿವಾಹ ಸ್ಥಾನ ಬಲಹೀನವಾಗಿದೆ. ವಿವಾಹಕಾರಕನಾದ ಶುಕ್ರನ ಮನೆಗಳಾದ ವೃಷಭ ಮತ್ತು ತುಲಾರಾಶಿಯಲ್ಲಿ ಕ್ರಮವಾಗಿ ಕ್ರಮವಾಗಿ ರಾಹು ಶನಿ ಇರುವುದರಿಂದ ಶುಕ್ರನು ನಿರ್ಬಲನಾದನು. ಶುಕ್ರನು ಸಪ್ತಮಾಧಿಪತಿಯಾಗಿ ಪಂಚಮಭಾವದಲ್ಲಿ ಉಚ್ಚನಾಗಿ ರವಿಯ ಜೊತೆ ಇರುವುದರಿಂದ ಇವರ ಅಂತಸ್ತಿಗಿಂತ ಹೆಚ್ಚು ಅಂತಸ್ತಿನ ಹುಡುಗಿಯನ್ನು ಮದುವಯಾದರು.

ರವಿ ಸ್ತ್ರೀ ದ್ವೇಷಿ ಗ್ರಹ. ರವಿಯು ಶುಕ್ರನ ಜೊತೆ ಇರುವುದರಿಂದ ಒಂದಲ್ಲಾ ಒಂದು ದಿನ ಇಬ್ಬರಿಗೂ ಸರಿ ಹೊಂದದೇ ಬೇರೆಯಾಗಬಹುದು.

ಸಂತಾನ ಕಾರಕನಾದ ಗುರುವಿಗೆ ಸಪ್ತಮದಲ್ಲಿ ಸ್ತ್ರೀ ಗ್ರಹ ಚಂದ್ರನಿರುವನು. ಸಂತಾನ ಸ್ಥಾನವಾದ ಪಂಚಮದಲ್ಲಿ ಇನ್ನೊಬ್ಬ ಸ್ತ್ರೀ ಗ್ರಹ ಉಚ್ಚ ಶುಕ್ರನಿರುವನು. ಇದರಿಂದ ಒಂದು ಹೆಣ್ಣು ಸಂತಾನವಾಗಬಹುದು.ಆದರೆ ಗರ್ಭದೋಷವಿದೆ. ಗರ್ಭಶಾಂತಿ, ಕುಜ, ಶನಿ, ಸರ್ಪಶಾಂತಿ ಮಾಡಿಕೊಂಡರೆ ಸಂತಾನವಾಗುವುದು.

ಭಾದಕಾಧಿಪತಿ ಚಂದ್ರನು ಲಗ್ನಕ್ಕೆ 8ರಲ್ಲಿದ್ದು ಕುಜನು ನೋಡುವನು. ಭಾದಕಾಧಿಪತಿ ಚಂದ್ರನು ಸಪ್ತಮದಲ್ಲಿರುವ ರಾಹುವಿನ ನಕ್ಷತ್ರದಲ್ಲಿದ್ದು ಕುಜನು ನೋಡುವನು. ಗುರುವೂ ನೋಡುವನು.



ಗುರುವಿನ ಮೂಲಕ ಶನಿಯು ನೋಡುವನು . ಇದರಿಂದ

ಜಾತಕರು ಮಾತೃಶಾಪಕ್ಕೆ ಒಳಗಾಗಿ ಜೀವನವನ್ನೇ ಕಳೆದುಕೊಳ್ಳುವರು.




**ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ**

ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535
jmonline@gmail.com www.jyothishamithra.com